ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1579

ಸದಸ್ಯರ ಹೆಸರು : ಶ್ರೀ ಅರವಿಂದ ಕುಮಾರ್ ಅರಳಿ (ವಿಧಾನಸಭೆಯಿಂದ ಚುನಾಯಿತರಾದವರು)

ಉತ್ತರಿಸುವವರು : ಮಾನ್ಯ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ, ವಿಕಲಚೇತನರ ಮತ್ತು ಹಿರಿಯ ನಾಗರಿಕರ ಸಬಲೀಕರಣ ಸಚಿವರು

ಉತ್ತರಿಸಬೇಕಾದ ದಿನಾಂಕ : 20/03/2020

| ಕ್ರ ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಬೀದರ್ ಜಿಲ್ಲೆಯಲ್ಲಿ ಸುಮಾರು 40 ಸಾವಿರಕ್ಕೂ ಅಧಿಕ ಮಕ್ಕಳು ಅಪೌಷ್ಠಿಕತೆಯಿಂದ ಬಳಲುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬೀದರ್ ಜಿಲ್ಲೆಯಲ್ಲಿ ಸುಮಾರು 40 ಸಾವಿರಕ್ಕೂ ಅಧಿಕ ಮಕ್ಕಳು ಅಪೌಷ್ಠಿಕತೆಯಿಂದ ಬಳಲುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿರುವುದಿಲ್ಲ.<br><br>ಬೀದರ್ ಜಿಲ್ಲೆಯಲ್ಲಿ 97393 ಆರೋಗ್ಯವಂತ ಮಕ್ಕಳು, 29559 ಸಾಧಾರಣ ತೂಕದ ಮಕ್ಕಳು, 93 ಕಡಿಮೆ ತೂಕದ ಮಕ್ಕಳು ಮತ್ತು 20 ತೀವ್ರ ಅಪೌಷ್ಠಿಕ ಮಕ್ಕಳಿರುತ್ತಾರೆ. |
| ಆ) | ಅಂಗನವಾಡಿ ಕೇಂದ್ರಗಳಿಗೆ ಮಹಿಳಾ ಆಹಾರ ತಯಾರಿಕಾ ಘಟಕ (ಎಂ.ಎಸ್.ಪಿ.ಸಿ.) ದಿಂದ ಕಳಪೆ ಗುಣಮಟ್ಟದ ಆಹಾರ ಸರಬರಾಜು ಮಾಡುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ ಈ ಎಂ.ಎಸ್.ಪಿ.ಸಿ. ಬಗ್ಗೆ ಸರ್ಕಾರ ಯಾವ ಕ್ರಮ ಕೈಗೊಂಡಿದೆ; | ಅಂಗನವಾಡಿ ಕೇಂದ್ರಗಳಿಗೆ ಮಹಿಳಾ ಪೂರಕ ಪೌಷ್ಠಿಕ ಆಹಾರ ಉತ್ಪಾದನಾ ಮತ್ತು ತರಬೇತಿ ಕೇಂದ್ರಗಳು (ಎಂ.ಎಸ್.ಪಿ.ಟಿ.ಸಿ.) ಉತ್ತಮ ಗುಣಮಟ್ಟದ ಆಹಾರ ಪದಾರ್ಥಗಳನ್ನು ಸರಬರಾಜು ಮಾಡುತ್ತಿದ್ದು, ಕಳಪೆ ಗುಣಮಟ್ಟದ ಆಹಾರ ಸರಬರಾಜು ಮಾಡಿರುವುದು ಸರ್ಕಾರದ ಗಮನಕ್ಕೆ ಬಂದಿರುವುದಿಲ್ಲ. |
| ಇ) | ಈ ಎಂ.ಎಸ್.ಪಿ.ಸಿ. ಗಳು ಸ್ವ-ಸಹಾಯ ಗುಂಪಿನ ಹೆಸರಿನಲ್ಲಿ ಉದ್ಯೋಗಸ್ಥರು ಕಳಪೆ ಮಟ್ಟದ ಆಹಾರ ಪೂರೈಕೆ ಮಾಡುವುದರ ಬಗ್ಗೆ ಸರ್ಕಾರದ ಗಮನಕ್ಕೆ ಬಂದಿದೆಯ; | |
| ಈ) | ಬಂದಿದ್ದಲ್ಲಿ ಅವರ ವಿರುದ್ಧ ಯಾವ ಕ್ರಮ ಕೈಗೊಳ್ಳಲಾಗಿದೆ, ಬರದೇ ಇದ್ದಲ್ಲಿ ಇದಕ್ಕೆ ಹೊಣೆಗಾರರು ಯಾರು? | ಮಹಿಳಾ ಪೂರಕ ಪೌಷ್ಠಿಕ ಆಹಾರ ಉತ್ಪಾದನಾ ಮತ್ತು ತರಬೇತಿ ಕೇಂದ್ರ (ಎಂ.ಎಸ್.ಪಿ.ಟಿ.ಸಿ.) ಅಂಗನವಾಡಿ ಕೇಂದ್ರಗಳಿಗೆ ಸರಬರಾಜು ಮಾಡುವ ಪೂರಕ ಪೌಷ್ಠಿಕ ಆಹಾರವನ್ನು ವಿಭಾಗ ಮಟ್ಟದ ಪ್ರಯೋಗಾಲಯದಲ್ಲಿ ವಿಶ್ಲೇಷಣೆ ಮಾಡಿ ನಂತರ ಸರಬರಾಜು ಮಾಡಲಾಗುತ್ತಿದೆ. ಕಳಪೆ ಗುಣಮಟ್ಟದ ಆಹಾರ ಸರಬರಾಜು ಮಾಡಿದ್ದಲ್ಲಿ ನಿಯಮಾನುಸಾರ ಎಂ.ಎಸ್.ಪಿ.ಟಿ.ಸಿ. ಗಳ ವಿರುದ್ಧ ಕ್ರಮ ಕೈಗೊಳ್ಳಲಾಗುವುದು. |

(ಶಶಿಕಲಾ ಅಣ್ಣಾಸಾಹೇಬ್ ಜೊಲ್ಲೆ)
ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಮತ್ತು ವಿಕಲಚೇತನರ,
ಹಾಗೂ ಹಿರಿಯ ನಾಗರೀಕರ ಸಬಲೀಕರಣ ಸಚಿವರು.

ಸಂಖ್ಯೆ : ಮಮಇ 89 ಐಸಿಡಿ 2020